# ಥಮಿಕ ಹಂತದ ಇಂಗ್ಲಿಷ್ ಬೋಧನೆಯ ಪ್ರಮುಖ ಸಮಸ್ಯೆಗಳು

ಎ.ಎಲ್. ಖನ್ನಾ

## ಪೀಠಿಕೆ

ಇಂಗ್ಲಿಷ್‌ನ ಪ್ರಾಮುಖ್ಯತೆಯು ಈಗ ಭಾರತದಲ್ಲಿ ಮಾತ್ರವಲ್ಲದೇ ಜಗತ್ತಿನಾದ್ಯಂತ ವ್ಯಾಪಕವಾಗಿ ಗುರುತಿಸಲ್ಪಟ್ಟಿದೆ. ಇಂಗ್ಲಿಷ್‌ಗಿಂತ ಚೈನೀಸ್, ಹಿಂದಿ, ಸ್ವಾಹಿಲಿ ಮುಂತಾದ ಭಾಷೆಗಳನ್ನೇ ಹೆಚ್ಚಿನ ಸಂಖ್ಯೆಯ ಜನರು ಮಾತನಾಡುತ್ತಾರೆ. ಆದರೂ ಉನ್ನತ ಜ್ಞಾನಲೋಕಕ್ಕೆ ಪ್ರವೇಶ ಪಡೆಯಲು ಮತ್ತು ಸಾಮಾಜಿಕ ಚಲನಶೀಲತೆಯನ್ನು ದೊರಕಿಸಿಕೊಳ್ಳಲು ಇಂಗ್ಲಿಷ್ ಮೂಲಕ ಮಾತ್ರ ಸಾಧ್ಯವೆಂದು ತೋರುತ್ತದೆ. ಹೀಗಾಗಿ ಇಂಗ್ಲಿಷ್ ಭಾಷೆಯನ್ನು ಕಲಿಯುವುದು ಅನಿವಾರ್ಯವಾಗಿದೆ. ಆದರೆ ಇತರ ಭಾಷೆಗಳನ್ನು ಬಲಿಗೊಟ್ಟು ಇಂಗ್ಲಿಷ್ ಪ್ರವರ್ಧಮಾನಕ್ಕೆ ಬರುವುದು ಸಾಧ್ಯವಿಲ್ಲ ಎಂಬುದೂ ಅಷ್ಟೇ ಸ್ಪಷ್ಟವಾಗಿದೆ; ಮಾನವರಿಗೆ ಭಾಷಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಯು ಜೀವವೈವಿಧ್ಯತೆಯಷ್ಟೇ ಮುಖ್ಯ. ಹೀಗಾಗಿ ನಾವು ಬಹುಭಾಷಾ ಸನ್ನಿವೇಶದಲ್ಲಿ ಇಂಗ್ಲಿಷ್ ಕಲಿಸುವ ಬಗ್ಗೆ ಯೋಚಿಸಲೇಬೇಕಾಗುತ್ತದೆ.

ಇಂಗ್ಲಿಷ್ ಇಂದು ಜಾಗತಿಕ ಸ್ಥಾನಮಾನವನ್ನು ದೊರಕಿಸಿಕೊಂಡಿದೆಯಲ್ಲದೇ ಅವಕಾಶಗಳ ಭಾಷೆ ಎಂದು ಪರಿಗಣಿತವಾಗಿದೆ. ಈ ಅಭಿಪ್ರಾಯವನ್ನು, ಟೀಚಿಂಗ್ ಆಫ್ ಇಂಗ್ಲಿಷ್ ಎಂಬ ನ್ಯಾಷನಲ್ ಫೋಕಸ್ ಗ್ರೂಪ್ ಪೊಸಿಷನ್ ಪೇಪರ್ ಸಂಪುಟ ೧.೪ರಲ್ಲಿ (NCERT 2006; ಪು.1) ಈ ಕೆಳಗಿನಂತೆ ಒತ್ತಿ ಹೇಳಲಾಗಿದೆ:

> ಇಂಗ್ಲಿಷ್ ಇಂದು ಭಾರತದಲ್ಲಿ ಗುಣಮಟ್ಟದ ಶಿಕ್ಷಣ ಪಡೆಯುವ ಮತ್ತು ರಾಷ್ಟ್ರೀಯ ಅಂತಾರಾಷ್ಟ್ರೀಯ ಜೀವನದಲ್ಲಿ ಪೂರ್ಣಪ್ರಮಾಣದಲ್ಲಿ ಭಾಗವಹಿಸಬೇಕೆಂಬ ಜನರ ಆಕಾಂಕ್ಷೆಗಳ ಸಂಕೇತವಾಗಿದೆ. ಅದರ ವಸಾಹತುಶಾಹಿ ಮೂಲವು ಈಗ ಮರೆತು ಹೋಗಿದೆ ಅಥವಾ ಅಪ್ರಸ್ತುತವಾಗಿದೆಯಲ್ಲದೆ ಸ್ವತಂತ್ರ ಭಾರತದಲ್ಲಿ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅದರ ಆರಂಭಿಕ ಪಾತ್ರವು ("ಗ್ರಂಥಾಲಯ ಭಾಷೆ", "ಜಗತ್ತಿನ ಕಿಟಕಿ") ಸಾಮಾಜಿಕವಾಗಿ ಮತ್ತು ಭಾಷಿಕವಾಗಿ ಸಾಕಷ್ಟು ಒಳಗೊಳ್ಳುವಂತಹುದಾಗಿಲ್ಲ ಎಂದು ಈಗ ಅನಿಸಲಾರಂಭಿಸಿದೆ. ಪ್ರಸ್ತುತ ಇಂಗ್ಲಿಷಿಗಿರುವ ಪ್ರತಿಷ್ಠೆಯು ವಿಶ್ವವೇದಿಕೆಯಲ್ಲಿ ಅದರ ಅಗಾಧ ಉಪಸ್ಥಿತಿಯಿಂದ ಮತ್ತು ರಾಷ್ಟ್ರೀಯ ರಂಗದಲ್ಲಿ ಇದರ ಪ್ರತಿಫಲನದಿಂದ ಹುಟ್ಟಿಕೊಂಡಿದೆ.

ಭಾರತ ಸರ್ಕಾರದ ರಾಷ್ಟ್ರೀಯ ಜ್ಞಾನ ಆಯೋಗವು (NKC) ಫೆಬ್ರುವರಿ 4, 2008ರಂದು ಪ್ರಧಾನ ಮಂತ್ರಿಗಳಿಗೆ ಸಲ್ಲಿಸಿದ ಶಾಲಾ ಶಿಕ್ಷಣದ ಕುರಿತ ಶಿಫಾರಸ್ಸುಗಳಲ್ಲಿ "ಇಂಗ್ಲಿಷ್‌ನ

ಮಹತ್ವವನ್ನು ಕೇವಲ ಬೋಧನಾ ಮಾಧ್ಯಮವಾಗಿ ಮಾತ್ರವಲ್ಲದೆ ಲಭ್ಯತೆಯ ನಿರ್ಧಾರಕ ಅಂಶವಾಗಿಯೂ” ಗುರುತಿಸಿದೆ:

> ಇಂಗ್ಲಿಷ್ ಭಾಷೆಯ ತಿಳಿವಳಿಕೆ ಮತ್ತು ಆ ಭಾಷೆಯ ಮೇಲಿನ ಪ್ರಭುತ್ವವು ಉನ್ನತ ಶಿಕ್ಷಣ, ಉದ್ಯೋಗದ ಸಂಭಾವ್ಯತೆಗಳು ಮತ್ತು ಸಾಮಾಜಿಕ ಅವಕಾಶಗಳ ಲಭ್ಯತೆಯನ್ನು ನಿರ್ಧರಿಸುತ್ತವೆ. ಒಂದು ಭಾಷೆಯಾಗಿ ಇಂಗ್ಲಿಷ್‌ನಲ್ಲಿ ಸಮರ್ಪಕ ತರಬೇತಿ ಪಡೆಯದೆ ಶಾಲೆ ಬಿಟ್ಟವರು ಉನ್ನತ ಶಿಕ್ಷಣದ ಜಗತ್ತಿನಲ್ಲಿ ಸದಾ ಅನನುಕೂಲತೆಯನ್ನು ಎದುರಿಸುತ್ತಾರೆ ಮತ್ತು ಸಾಕಷ್ಟು ಇಂಗ್ಲಿಷ್ ತಿಳಿದಿಲ್ಲದವರಿಗೆ ನಮ್ಮ ಮೊದಲ ದರ್ಜೆಯ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವುದು ಅತ್ಯಂತ ಕಷ್ಟಕರವಾಗುತ್ತದೆ. ಈ ಅನನುಕೂಲತೆಯು ಉದ್ಯೋಗ ಪ್ರಪಂಚದಲ್ಲಿ ಮತ್ತಷ್ಟು ಎದ್ದು ಕಾಣುತ್ತದೆ - ವೃತ್ತಿಪರ ಉದ್ಯೋಗಗಳಲ್ಲಿ ಮಾತ್ರವಲ್ಲ, ಒಟ್ಟಾರೆಯಾಗಿ ಕೈ ಕೆಸರಾಗದ ಯಾವುದೇ ಕೆಲಸದಲ್ಲಾದರೂ ಸಹ. (ಪುಟ. 48)

ಮುಂದುವರೆದು, ರಾಷ್ಟ್ರೀಯ ಜ್ಞಾನ ಆಯೋಗವು ಹೀಗೆ ಶಿಫಾರಸ್ಸು ಮಾಡುತ್ತದೆ: ಒಂದು ಭಾಷೆಯಾಗಿ ಇಂಗ್ಲಿಷಿನ ಕಲಿಕೆಯನ್ನು –

> ಮಗುವಿನ ಪ್ರಥಮ ಭಾಷೆ (ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆ) ಜೊತೆಗೆ ಮೊದಲನೇ ತರಗತಿಯಿಂದಲೇ ಪ್ರಾರಂಭಿಸಬೇಕು. ಈ ಹಂತದ ಭಾಷಾ ಕಲಿಕೆಯು ವ್ಯಾಕರಣ ಮತ್ತು ನಿಯಮಗಳಿಗೆ ಅಸಮನಾದ ಒತ್ತು ನೀಡದೆ ಮಗುವಿಗೆ ಅರ್ಥಪೂರ್ಣ ಕಲಿಕೆಯ ಅನುಭವಗಳನ್ನು ದೊರಕಿಸಿಕೊಡಲು ಎರಡೂ ಭಾಷೆಗಳನ್ನು ಬಳಸುವುದರ ಮೇಲೆ ಗಮನಹರಿಸಬೇಕು. (ಪು.49)

ರಾಷ್ಟ್ರೀಯ ಜ್ಞಾನ ಆಯೋಗದ ಈ ಶಿಫಾರಸ್ಸನ್ನು ಅನುಸರಿಸಿ, ಹಲವಾರು ರಾಜ್ಯಗಳ ಮತ್ತು ಕೇಂದ್ರಾಡಳಿತ ಪ್ರದೇಶಗಳ ಸರ್ಕಾರಗಳು ಒಂದನೇ ತರಗತಿಯಿಂದ ಇಂಗ್ಲಿಷನ್ನು ಕಡ್ಡಾಯ ವಿಷಯವಾಗಿ ಪರಿಚಯಿಸಲು ನಿರ್ಧರಿಸಿವೆ. ಆದಾಗ್ಯೂ, ಪ್ರಾಥಮಿಕ ಹಂತದಲ್ಲಿ ಇಂಗ್ಲಿಷ್ ಬೋಧನೆಯಲ್ಲಿ ಪರಿಣಾಮಕಾರಿ ಪ್ರಗತಿಯನ್ನು ಸಾಧಿಸಬೇಕಾದರೆ ಈ ಕೆಳಗಿನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕಾಗುತ್ತದೆ.

## ಕಲಿಕಾರ್ಥಿಗಳ ಸಾಮಾಜಿಕ ಪರಿಸರ

ಇಂಗ್ಲಿಷ್ ಕಲಿಕಾರ್ಥಿಗಳು ವಿಭಿನ್ನ ಸಾಮಾಜಿಕ ಹಿನ್ನೆಲೆಗಳಿಂದ ಬಂದವರೆನ್ನುವುದನ್ನು ನಾವು ಪರಿಗಣನೆಗೆ ತೆಗೆದುಕೊಳ್ಳುವುದು ಅಗತ್ಯ. ಅದರಲ್ಲಿ ಕೆಲವರ ಸಾಮಾಜಿಕ ಹಿನ್ನೆಲೆ ಎಂತಹುದೆಂದರೆ ಅವರ ಮನೆಗಳಲ್ಲಿ ಎಲ್ಲರೂ ಇಂಗ್ಲಿಷ್ ಮಾತನಾಡುತ್ತಾರೆ; ಆ ಕುಟುಂಬದ ಹೊಕ್ಕು ಬಳಕೆ ಇರುವುದೂ ಅದೇ ಭಾಷಿಕ ಅನುಭವವಿರುವ ಮತ್ತು ಮಾತೃಭಾಷೆಯನ್ನು ಅಪರೂಪಕ್ಕೆ ಮಾತ್ರವೇ ಬಳಸುವ ಜನರೊಂದಿಗೆ. ಅಂದರೆ ಅಲ್ಲಿ ಇಂಗ್ಲಿಷ್ ಹೆಚ್ಚು ಕಡಿಮೆ ಸ್ಥಳೀಯ ಭಾಷೆಯೇ ಆಗಿರುತ್ತದೆ. ಅಂತಹ ಸಾಮಾಜಿಕ ಸನ್ನಿವೇಶದಿಂದ ಬರುವ ಕಲಿಕಾರ್ಥಿಗಳು ಅಪರೂಪ. ಆದರೆ ಅವರು

ಇಂಗ್ಲಿಷ್ ಕಲಿಕಾರ್ಥಿಗಳ ಸಾಲಿನ ಒಂದು ತುದಿಯಲ್ಲಿದ್ದಾರೆ. ಇನ್ನೊಂದು ತುದಿಯಲ್ಲಿರುವ ಕಲಿಕಾರ್ಥಿಗಳಿಗೆ ಮನೆಯಲ್ಲಾಗಲಿ ಹೊರಗಡೆಯಾಗಲಿ ಇಂಗ್ಲಿಷ್‌ನ ಲಭ್ಯತೆ ಏನೇನೂ ಇಲ್ಲ. ಅವರ ಪಾಲಿಗಿರುವುದು ಶಾಲೆಯಲ್ಲಿ ಕಲಿತಷ್ಟೇ ಇಂಗ್ಲಿಷ್. ಅಲ್ಲಿಯೂ ಸಹ ಅದನ್ನು ಅಪರೂಪಕ್ಕೆ ಮಾತ್ರವೇ ಬಳಸಲಾಗುತ್ತದೆ. ಆದರೆ ಈ ಕಲಿಕಾರ್ಥಿಗಳಿಗೆ ಇಂಗ್ಲಿಷ್ ಕಲಿಯಲು ಬಲವಾದ ಪ್ರೇರಣೆ ಇದೆ. ಏಕೆಂದರೆ ಅವರ ಬವಣೆ ಮತ್ತು ಹಿಂದುಳಿದಿರುವಿಕೆಯಿಂದ ಅವರನ್ನು ಪಾರುಮಾಡಬಲ್ಲ ಸಾಮರ್ಥ್ಯವಿರುವುದು ಇಂಗ್ಲಿಷ್‌ಗೆ ಮಾತ್ರವೆಂದು ಅವರ ಪಾಲಕರೋ ಅವರ ಸಮುದಾಯದ ಸದಸ್ಯರೋ ಅವರನ್ನು ನಂಬಿಸಿರುತ್ತಾರೆ. ಹೀಗಾಗಿ ಅವರಿಗೆ ತಮ್ಮ ಮಾತೃಭಾಷೆ(ಗಳು) ಅಥವಾ ಅವರ ಸಹಪಾಠಿಗಳು ಬಳಸುವ ಭಾಷೆ/ಭಾಷೆಗಳಿಗಿಂತ ಇಂಗ್ಲಿಷ್ ಕಲಿಯಲು ಹೆಚ್ಚಿನ ಪ್ರೇರಣೆ ಇರುತ್ತದೆ.

ಹೀಗೆ, ಇಂಗ್ಲಿಷ್ ಬೋಧನೆಯಲ್ಲಿ ಹಸ್ತಕ್ಷೇಪದ ಕುರಿತು ಮಾತಾಡುವಾಗ, ನಾವು ಯಾವ ಬಗೆಯ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುತ್ತಿದ್ದೇವೆ ಎಂಬುದನ್ನೂ ಮೊದಲು ಗುರುತಿಸಿಕೊಳ್ಳಬೇಕಾಗುತ್ತದೆ. ಒಂದು ಬಗೆಯ ಹಿನ್ನೆಲೆಯ ವಿದ್ಯಾರ್ಥಿಗಳು ಕಲಿಯಬೇಕಾದದ್ದು ಇನ್ನೊಂದು ಬಗೆಯ ಹಿನ್ನೆಲೆಯ ಕಲಿಕಾರ್ಥಿಗಳಿಗೆ ಪ್ರಸ್ತುತವೇ ಆಗಿರಲಿಕ್ಕಿಲ್ಲ. ಅಂತಿಮವಾಗಿ ಎರಡೂ ಗುಂಪಿನವರೂ ಕಾಲ್ ಸೆಂಟರ್, ಕಾರ್ಪೋರೇಟ್ ಕಛೇರಿ, ಸೈನ್ಯ ಅಥವಾ ವಿಶ್ವವಿದ್ಯಾಲಯದಂತಹ ಯಾವುದೇ ಸ್ಥಳದಲ್ಲೇ ಆದರೂ ಕೆಲಸ ಮಾಡಲು ಸಜ್ಜುಗೊಳಿಸಲ್ಪಡುತ್ತಾರೆ ಎಂಬುದು ಬೇರೆಯದೇ ಪ್ರಶ್ನೆ.

**ಶಿಕ್ಷಕ**

ಎರಡನೆಯ ಪ್ರಮುಖ ವಿಷಯವು ಶಿಕ್ಷಕರ ನಂಬಿಕೆಗಳು, ವಾಡಿಕೆಗಳು, ಸಾಮರ್ಥ್ಯ ಮತ್ತು ಲಭ್ಯತೆಗೆ ಸಂಬಂಧಿಸಿದೆ. ಕೆಲವೇ ಕೆಲವು ನಗರಸ್ಥಿತ ಗಣ್ಯ ಶಾಲೆಗಳ ಶಿಕ್ಷಕರನ್ನು ಹೊರತುಪಡಿಸಿ, ಇಂಗ್ಲಿಷ್ ಶಿಕ್ಷಕರಿಗೆ ಇಂಗ್ಲಿಷ್ ಬೋಧನೆಯಲ್ಲಿ ಸೂಕ್ತ ತರಬೇತಿಯೇ ಇರುವುದಿಲ್ಲ ಎಂದು ನಾವು ಗಮನಿಸಿದ್ದೇವೆ. ಇಂಗ್ಲಿಷ್ ಬೋಧನೆಯಲ್ಲಿ ತರಬೇತಿ ಪಡೆದಿದ್ದೇವೆ ಎಂದು ಹೇಳಿಕೊಳ್ಳುವವರೂ ಸಹಿತ ಭಾಷೆಗಳನ್ನು ಹೇಗೆ ಕಲಿಯಲಾಗುತ್ತದೆ ಮತ್ತು ಹೇಗೆ ಕಲಿಸಲಾಗುತ್ತದೆ ಎಂಬುದರ ಕುರಿತು ಬಳಕೆಯಲ್ಲಿಲ್ಲದ ವಿಚಾರಗಳನ್ನೇ ಕಲಿತು ಬಂದಿರುತ್ತಾರೆ. ಹೀಗಾಗಿ ಕಲಿಕಾರ್ಥಿಯು ಜ್ಞಾನವನ್ನು ತಟಸ್ಥವಾಗಿ ಸ್ವೀಕರಿಸುತ್ತಾನೆ ಮತ್ತು ಅವನ/ಅವಳ ಪೂರ್ವಜ್ಞಾನವೆಲ್ಲ ಹೊಸ ಭಾಷೆ(ಗಳ) ಕಲಿಕೆಯಲ್ಲಿ ನಿರುಪಯುಕ್ತವೆಂದೇ ಅವರು ನಂಬಿಕೊಂಡಿದ್ದಾರೆ. ಕಲಿಕಾರ್ಥಿಯು ತನ್ನ ಭಾವನೆ, ಆಲೋಚನೆ ಮತ್ತು ಅನಿಸಿಕೆಗಳನ್ನು ವ್ಯಕ್ತಪಡಿಸಲು ತನ್ನ ಮಾತೃಭಾಷೆಯನ್ನು ಬಳಸಲು ಯತ್ನಿಸಿದರೆ ತಕ್ಷಣವೇ ಅವನ/ಅವಳ ಬಾಯಿ ಮುಚ್ಚಿಸಲಾಗುತ್ತದೆ. ಕಲಿಕಾರ್ಥಿಯು ತನ್ನ ಸಮುದಾಯದಿಂದ ಏನನ್ನೂ ಪಡೆಯಲಿಕ್ಕಿಲ್ಲದ ಸ್ವಯಂಪೂರ್ಣ ದ್ವೀಪವೆಂಬಂತೆ ಪರಿಗಣಿಸಲ್ಪಡುತ್ತಾನೆ. ಶಿಕ್ಷಕರ ಈ ರೀತಿಯ ವರ್ತನೆಯು ಪ್ರಸ್ತುತ ಶಿಕ್ಷಕ ತರಬೇತಿಗೆ ಅಂಟಿಕೊಂಡಿರುವ ಕಾಯಿಲೆಯ ಲಕ್ಷಣವಾಗಿದೆ. ಈ ಶಿಕ್ಷಕರಿಗೆ ಭಾಷೆಗಳನ್ನು ಹೇಗೆ ಕಲಿಯಲಾಗುತ್ತದೆ ಎಂಬುದರ ಕುರಿತ ಹೊಸ ತಿಳಿವಳಿಕೆಯಲ್ಲಿ ಮರು ತರಬೇತಿ ನೀಡುವುದು ಅಗತ್ಯ. ಇಲ್ಲವಾದರೆ ಅವರು ಜತೆಗೂಡಿ ಕಲಿಕೆ, ಕಲಿಕಾರ್ಥಿಯ ಸ್ವಾಯತ್ತತೆ, ಸಮಗ್ರ ಮೌಲ್ಯಮಾಪನ, ಮಾತೃಭಾಷೆಯಲ್ಲೇ ಪರಿಕಲ್ಪನೆಗಳ ಅರ್ಜನೆ, ದ್ವಿಭಾಷಿಕತೆ, ಅಧಿಭಾಷಿಕ (metalinguistic) ಅರಿವು, ಮಾಹಿತಿ ಸಂಗ್ರಹದಿಂದ ಜ್ಞಾನೋತ್ಪಾದನೆಯೆಡೆಗೆ ಚಲನೆ, ವಿಮರ್ಶಾತ್ಮಕ ಬೋಧನಾ ವಿಧಾನ

ಮುಂತಾದವುಗಳಿಗೆ ಒತ್ತು ನೀಡುವ ಭಾಷಾ ಕಲಿಕೆಯ ಹೊಸ ವಿಧಾನಗಳಿಗೆ ಅಡ್ಡಿಯುಂಟು ಮಾಡುತ್ತಿರುತ್ತಾರೆ.

ಹೊಸ ಶಿಕ್ಷಣ ಮಾದರಿ ಮತ್ತು ಅದರ ವಿಧಾನ, ಬೋಧನಾ ಸಾಮಗ್ರಿಗಳು ಮತ್ತು ಕಲಿಕಾರ್ಥಿಗಳೆಡೆಗಿನ ಮನೋಭಾವದ ದೃಷ್ಟಿಯಿಂದ ತರಗತಿಗಳಲ್ಲಾಗಬೇಕಾದ ಬದಲಾವಣೆಗಳ ಕುರಿತು ಹೊಸ ತಳಿಯ ಶಿಕ್ಷಕರಿಗೆ ಶಿಕ್ಷಣ ನೀಡಬೇಕಾದದ್ದು ಅವಶ್ಯ. ಎರಡನೆಯದಾಗಿ, ಎಲ್ಲಿಯೋ ಕಾಡುಮೂಲೆಯಲ್ಲಿರುವ (remote) ಶಾಲೆಯಲ್ಲೂ ಸಹಿತ ಹೊಸ ಶಿಕ್ಷಣ ಮಾದರಿಯಲ್ಲಿ ಸಂಪೂರ್ಣವಾಗಿ ತರಬೇತಾದ ಕನಿಷ್ಠ ಒಬ್ಬ ಶಿಕ್ಷಕರಾದರೂ ಲಭ್ಯವಿರುವುದನ್ನು ಸರಕಾರವು ಕಡ್ಡಾಯಗೊಳಿಸಬೇಕು. ಆಗ ಈ ಶಿಕ್ಷಕರು ಇಂಗ್ಲಿಷ್ ಮತ್ತು ಇತರ ಭಾಷೆಗಳನ್ನು ಕಲಿಸುವ ಉಳಿದ ಶಿಕ್ಷಕರಿಗೆ ಸೂಕ್ತ ತಿಳಿವಳಿಕೆ ನೀಡಲು ಸಾಧ್ಯವಾಗುತ್ತದೆ. ಇದರಿಂದ ನಮ್ಮ ಶಾಲೆಗಳಲ್ಲಿ ಶಿಕ್ಷಕ ತರಬೇತಿಯ ಮೇಲೆ ಸಕಾರಾತ್ಮಕ ಪರಿಣಾಮ ಉಂಟಾಗುತ್ತದೆ.

ಶಿಕ್ಷಕರಿಗೆ ಸಂಬಂಧಿಸಿದ ಇನ್ನೊಂದು ಮುಖ್ಯ ವಿಷಯವೆಂದರೆ ಅವರಿಗೆ ಇಂಗ್ಲಿಷ್‌ನಲ್ಲಿ ಸಾಕಷ್ಟು ಸಾಮರ್ಥ್ಯ ಇಲ್ಲದಿರುವುದು. ಇಂಗ್ಲಿಷ್ ಕಲಿಸುವ ಜವಾಬ್ದಾರಿಯನ್ನು ಹೊಂದಿರುವ ಬಹುತೇಕ ಶಿಕ್ಷಕರಿಗೆ ಅವರು ವಿದ್ಯಾರ್ಥಿಗಳಲ್ಲಿ ರೂಪಿಸಬೇಕೆಂದು ನಿರೀಕ್ಷಿಸಲಾಗುವ ಇಂಗ್ಲಿಷ್ ಭಾಷಾ ಕೌಶಲ್ಯಗಳಲ್ಲೇ ಪ್ರಾವೀಣ್ಯತೆ ಇರುವುದಿಲ್ಲ ಎಂಬುದು ಎಲ್ಲರಿಗೂ ಗೊತ್ತಿರುವುದೇ ಆದರೂ ಅದು ಖೇದದ ಸಂಗತಿಯೇ ಸರಿ. ಇಂಗ್ಲಿಷ್ ಬೋಧನೆಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವ ನಿಟ್ಟಿನಲ್ಲಿ, ರಾಜ್ಯಗಳು ಅಗತ್ಯ ಮೂಲಸೌಕರ್ಯಗಳನ್ನು ರೂಪಿಸದೇ ಒಂದನೇ ತರಗತಿಯಿಂದಲೇ ಇಂಗ್ಲಿಷನ್ನು ಪರಿಚಯಿಸಲು ಈಗಾಗಲೇ ನಿರ್ಧರಿಸಿರುವುದರಿಂದ ಶಿಕ್ಷಕರಿಗೆ ನಿಯೋಜಿಸಲಾದ ಜವಾಬ್ದಾರಿಗಳನ್ನು ನಿರ್ವಹಿಸಲು ಅಗತ್ಯವಾದ ಕನಿಷ್ಠ ಮಟ್ಟದ ಇಂಗ್ಲಿಷ್ ಪ್ರಾವೀಣ್ಯತೆಯನ್ನಾದರೂ ಗಳಿಸಲು ಸಹಾಯವಾಗುವಂತೆ ಇಂಗ್ಲಿಷಿನಲ್ಲಿ ಸಾಮರ್ಥ್ಯ ನಿರ್ಮಾಣ ಕಾರ್ಯಾಗಾರವನ್ನು ಆಯೋಜಿಸುವುದು ಸರ್ಕಾರಗಳ ಕರ್ತವ್ಯವಾಗಿದೆ. ಈ ಬಗೆಯ ಸಾಮೂಹಿಕವಾದ ಶಿಕ್ಷಕರ ಸಾಮರ್ಥ್ಯವನ್ನು ರೂಪಿಸುವ ಕಾರ್ಯಕ್ರಮವನ್ನು ಕೈಗೊಳ್ಳಬಹುದಾದ ಒಂದು ಮಾರ್ಗವೆಂದರೆ ಶಾಲೆ, ಕಾಲೇಜು ಮತ್ತು ವಿಶ್ವವಿದ್ಯಾಲಯಗಳಿಂದ ಇಂಗ್ಲಿಷಿನಲ್ಲಿ ನಿಜವಾಗಿಯೂ ಪ್ರಾವೀಣ್ಯತೆಯನ್ನು ಹೊಂದಿರುವ ನಿವೃತ್ತ ಇಂಗ್ಲಿಷ್ ಶಿಕ್ಷಕರನ್ನು ನಿಯೋಜಿಸಿಕೊಳ್ಳುವುದು. ರಾಷ್ಟ್ರೀಯ ಜ್ಞಾನ ಆಯೋಗದ ಸೂಚನೆ ಹೀಗಿದೆ:

> ಇಂಗ್ಲಿಷ್ ಭಾಷೆಯ ಶಿಕ್ಷಕರು ದೊಡ್ಡ ಸಂಖ್ಯೆಯಲ್ಲಿ ಅಗತ್ಯವಿರುವುದರಿಂದ ಇಂಗ್ಲಿಷ್‌ನಲ್ಲಿ ಹೆಚ್ಚಿನ ಪ್ರಾವೀಣ್ಯತೆಯನ್ನು ಮತ್ತು ಉತ್ತಮ ಸಂವಹನ ಕೌಶಲ್ಯವನ್ನು ಹೊಂದಿರುವ ಪದವೀಧರರನ್ನು ಔಪಚಾರಿಕ ಶಿಕ್ಷಕ ತರಬೇತಿ ಅರ್ಹತೆಗಳಿಲ್ಲದಾಗ್ಯೂ (qualifications) ನಿಯೋಜಿಸಿಕೊಳ್ಳಬೇಕು. ರಾಷ್ಟ್ರೀಯ ಪರೀಕ್ಷಾ ಸೇವೆಯು ಅಭಿವೃದ್ಧಿಪಡಿಸಿದ ಸೂಕ್ತ ವಿಧಾನದ ಮೂಲಕ ಅವರನ್ನು ಆಯ್ಕೆ ಮಾಡಿಕೊಂಡು ನಂತರ ಅವರಿಗೆ ಅಲ್ಪಾವಧಿ ಪರಿಚಯಾತ್ಮಕ ತರಬೇತಿಯನ್ನು ನೀಡಬೇಕು. ದೇಶದಾದ್ಯಂತ ಇರುವ ಸುಮಾರು ನಾಲ್ಕು ದಶಲಕ್ಷ ಶಾಲಾ ಶಿಕ್ಷಕರಿಗೆ – ವಿಶೇಷವಾಗಿ ಪ್ರಾಥಮಿಕ ಹಂತದ ಶಿಕ್ಷಕರಿಗೆ –

> ಅವರ ವಿಷಯ ಪರಿಣಿತಿಯನ್ನು ಲೆಕ್ಕಿಸದೆ, ರಜಾಕಾಲದ ತರಬೇತಿ ಕಾರ್ಯಕ್ರಮಗಳು ಅಥವಾ ಇತರ ಅಲ್ಪಾವಧಿ ಕೋರ್ಸ್‌ಗಳ ಮೂಲಕ ಇಂಗ್ಲಿಷ್‌ನಲ್ಲಿ ತಮ್ಮ ಪ್ರಾವೀಣ್ಯತೆಯನ್ನು ಸುಧಾರಿಸಿಕೊಳ್ಳಲು ತರಬೇತಿ ನೀಡಬೇಕು. ಹೆಚ್ಚಿನ ಶಿಕ್ಷಕ ತರಬೇತಿ ಕಾರ್ಯಕ್ರಮಗಳು ಶಿಕ್ಷಕರ ನೈಜ ಅಗತ್ಯಗಳ ಸಮೀಕ್ಷೆಯನ್ನು ಆಧರಿಸಿಲ್ಲ. ಹೀಗಾಗಿ ಭಾಷಾ ಬೋಧನೆಯ ತರಬೇತಿಯೂ ಸೇರಿದಂತೆ ಇಂದು ಅಸ್ತಿತ್ವದಲ್ಲಿರುವ ಸೇವಾಪೂರ್ವ ಮತ್ತು ಸೇವಾ ಅವಧಿಯ ತರಬೇತಿಯ ಅಗತ್ಯವನ್ನು ಪೂರೈಸುತ್ತಿರುವ ಸಮಗ್ರ ಶಿಕ್ಷಕ ತರಬೇತಿ ವ್ಯವಸ್ಥೆಯನ್ನು ಕೂಲಂಕುಷವಾಗಿ ಪರಿಶೀಲಿಸಬೇಕಿದೆ. ಹೀಗೆ ಪರಿಶೀಲಿಸುವಾಗ ಪಠ್ಯಕ್ರಮದಲ್ಲಿ ಭಾಷೆಯ ಕೇಂದ್ರೀಯತೆಯನ್ನು ಗುರುತಿಸಬೇಕು. (ಪುಟಗಳು. 49-50)

ನ್ಯಾಷನಲ್ ಫೋಕಸ್ ಗ್ರೂಪ್‌ನ ಶಿಫಾರಸ್ಸುಗಳಲ್ಲಿ ಇದೇ ಭಾವನೆ ಮತ್ತು ಕಾಳಜಿಗಳು ವ್ಯಕ್ತವಾಗಿವೆ. ಅದರಲ್ಲಿ ಅವರು "ಎಲ್ಲಾ ಶಿಕ್ಷಕರೂ ಭಾಷೆಯನ್ನು ಹೇಗೆ ಕಲಿಸಲಾಗುತ್ತದೆ ಎಂಬುದರ ಆಧಾರದ ಮೇಲೆ ಆಯಾ ಸನ್ನಿವೇಶ ಮತ್ತು ಸ್ತರಗಳಿಗೆ ಸೂಕ್ತವಾದ ರೀತಿಗಳಲ್ಲಿ ಇಂಗ್ಲಿಷ್ ಬೋಧಿಸುವ ಕೌಶಲ್ಯಗಳನ್ನು ಹೊಂದಿರಬೇಕು" ಎಂದು ಒತ್ತಿ ಹೇಳುತ್ತಾರೆ.

ಅಂತಹ ಕ್ರಮಗಳನ್ನು ತಕ್ಷಣವೇ ತೆಗೆದುಕೊಳ್ಳದಿದ್ದರೆ, ಇಂಗ್ಲಿಷ್ ಕಲಿಸುವ ನಿಟ್ಟಿನಲ್ಲಿ ವ್ಯಯಿಸುವ ಶ್ರಮ ಮತ್ತು ಹಣವು ರಾಷ್ಟ್ರೀಯ ಸಂಪನ್ಮೂಲದ ಬೃಹತ್ ಅಪವ್ಯಯವೆಂದಾಗುತ್ತದೆ. ಈ ತರಬೇತಿಯ ಪರಿಣಾಮವಾಗಿ ಶಿಕ್ಷಕರು ಮಕ್ಕಳ ಭಾಷೆಗಳನ್ನು ಗೌರವಿಸಲು ಕಲಿಯುತ್ತಾರೆ ಮತ್ತು ಇಂಗ್ಲಿಷ್ ಜೊತೆ ಇವುಗಳನ್ನೂ ಬಳಸಲು ಅನುಮತಿಸುತ್ತಾರೆ. ಇಂಗ್ಲಿಷ್ ಕಲಿಕೆಯ ಆರಂಭಿಕ ಹಂತಗಳಲ್ಲಿ ಕಲಿಕಾರ್ಥಿಯು ತನ್ನ ಪ್ರಥಮ ಭಾಷೆಯಲ್ಲೇ ಹೆಚ್ಚು ನಿರರ್ಗಳನಾಗಿದ್ದಾಗ ಇಂಗ್ಲಿಷ್ ಪದ ತಿಳಿಯದಿರುವಾಗಲೆಲ್ಲ ಅವನಿಗೆ ತನ್ನ ಪ್ರಥಮ ಭಾಷೆಯನ್ನು ಬಳಸಲು ಅನುಮತಿಸಬಹುದು. ಇಂಗ್ಲಿಷ್ ಜೊತೆ ತನ್ನ ಪ್ರಥಮ ಭಾಷೆಯನ್ನು ಬಳಸುವ ಸ್ವಾತಂತ್ರ್ಯವು ಅವನಿಗೆ ಆತ್ಮವಿಶ್ವಾಸವನ್ನು ನೀಡುತ್ತದೆಯಲ್ಲದೇ ಯಾವುದೇ ಭಯ ಅಥವಾ ಆತಂಕವಿಲ್ಲದೇ ಇಂಗ್ಲಿಷ್ ಕಲಿಯಲು ಪ್ರೇರಣೆ ದೊರಕುತ್ತದೆ. ಕಲಿಕಾರ್ಥಿಯು ಇಂಗ್ಲಿಷ್ ಮೇಲೆ ಪ್ರಭುತ್ವವನ್ನು ಪಡೆದಂತೆ, ತನ್ನ ಮೊದಲ ಭಾಷೆಯನ್ನು ನಿಗ್ರಹಿಸದೆ ಅಥವಾ ಅದರ ಬಗ್ಗೆ ನಾಚಿಕೆಪಡದೆ ಇಂಗ್ಲಿಷ್‌ಗೆ ಬದಲಾಯಿಸಬಹುದು. ಅನೇಕ ಪ್ರಥಮ ಮತ್ತು ದ್ವಿತೀಯ ಭಾಷಾ ಸಂಶೋಧಕರ (ಇತರ ಅನೇಕ ಸಂಶೋಧಕರಲ್ಲಿ ಒಬ್ಬರಾದ, ಕ್ರಾಶಿನ್, 1987, 1988) ಅಭಿಪ್ರಾಯದಲ್ಲಿ ಯಾವುದೇ ಭಾಷೆಯ ಅತ್ಯುತ್ತಮ ಕಲಿಕೆಗೆ ಈ ಮನೋಭಾವವು ಅಗತ್ಯ ಸ್ಥಿತಿಯಾಗಿದೆ. ಇದು ಮತ್ತೊಂದು ಅತ್ಯಂತ ಪ್ರಮುಖ ಪರಿಣಾಮವನ್ನೂ ಹೊಂದಿದೆ: ಬಹುಭಾಷೆ ಬಳಸುವವರನ್ನು ರೂಪಿಸಲು ಇದು ಅತ್ಯಂತ ಉತ್ತಮವಾದ ಅಡಿಪಾಯವನ್ನು ಹಾಕುತ್ತದೆ. ನಿಸ್ಸಂದೇಹವಾಗಿ ಇಂದು ಜಗತ್ತಿನಲ್ಲಿ ಯಾವುದೇ ಭಾಗದ ಭಾಷಾ ಶಿಕ್ಷಣದ ಗುರಿಗಳಲ್ಲಿ ಒಂದಾಗಿದೆ. ನ್ಯಾಷನಲ್ ಫೋಕಸ್ ಗ್ರೂಪ್ ತನ್ನ ಶಿಫಾರಸ್ಸುಗಳಲ್ಲಿ ಹೀಗೆ ಹೇಳುತ್ತದೆ: "ಇಂಗ್ಲಿಷ್ ಮಾಧ್ಯಮ ಮತ್ತು ಪ್ರಾದೇಶಿಕ ಭಾಷಾ ಮಾಧ್ಯಮ ಶಾಲೆಗಳಲ್ಲಿ ಬಹುಭಾಷಿಕತೆಯೇ ಗುರಿಯಾಗಿರಬೇಕು" (Teaching of English 1,ಇಂಗ್ಲಿಷ್ ಪು. 30).

ಒಂದು ಬೋಧನಾ ವಿಧಾನವಾಗಿ ಬಹುಭಾಷಾವಾದವನ್ನು ಸಹ ನ್ಯಾಷನಲ್ ಫೋಕಸ್ ಗ್ರೂಪ್‌ನ Teaching of Indian Languages ಎಂಬ ಪೊಸಿಷನ್ ಪೇಪರ್‌ನಲ್ಲಿ ಪ್ರತಿಪಾದಿಸಲಾಗಿದೆ:

> ತರಗತಿಯಲ್ಲಿ ಉಪಲಬ್ಧವಿರುವ ಭಾಷೆಗಳ ಬಾಹುಳ್ಯವನ್ನು ಬಳಸಿಕೊಳ್ಳಲು ಭಾಷಾ ಬೋಧನಾ ವಿಧಾನಗಳು ಸೂಕ್ತ ತಾಣಗಳೆನಿಸಬಹುದು. ಮಕ್ಕಳ ಸಹಯೋಗದೊಂದಿಗೆ ತರಗತಿಯಲ್ಲಿ ಲಭ್ಯವಿರುವ ಬಹುಭಾಷಿಕತೆಯ ಸಂವೇದನಾಶೀಲ ವಿಶ್ಲೇಷಣೆಯು ವಿದ್ಯಾರ್ಥಿಗಳು ಮತ್ತು ಶಿಕ್ಷಕರಲ್ಲಿ ಅಧಿಭಾಷಿಕ ಅರಿವು ಮೂಡಿಸಲು ಸಹಕಾರಿ. (ಪು. 23)

ಅಗ್ನಿಹೋತ್ರಿಯವರು ಹಲವಾರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಮತ್ತು ಪ್ರಕಟಣೆಗಳಲ್ಲಿ (ಅಗ್ನಿಹೋತ್ರಿ, 1995, 1997, 2000, 2007) ಈ ನಿಲುವನ್ನು ಪುನರುಚ್ಚರಿಸಿದ್ದಾರೆ. ತಮ್ಮ ಪ್ರಬಂಧವೊಂದರಲ್ಲಿ (ಅಗ್ನಿಹೋತ್ರಿ, 2007) ಅವರು ಹೀಗೆನ್ನುತ್ತಾರೆ:

> ಭವಿಷ್ಯದ ವ್ಯಾಸಂಗ ಕ್ರಮ, ಪಠ್ಯಕ್ರಮ, ಪಠ್ಯಪುಸ್ತಕಗಳು, ತರಗತಿ ನಿರ್ವಹಣೆಯ ಯೋಜನೆ, ನಿರರ್ಥಕ ಶಬ್ದಾಡಂಬರಕ್ಕೆ ಬದಲಾಗಿ, ಸಮಾನತೆ, ನ್ಯಾಯ, ಸಾಮಾಜಿಕ ಸಂವೇದನಾಶೀಲತೆ, ಶಾಂತಿ, ಅರ್ಥಪೂರ್ಣ ಸಾಮೂಹಿಕ ಹೊಣೆಗಾರಿಕೆಯ ಮೌಲ್ಯಗಳಿಂದ ನಿರ್ವಹಿಸಲ್ಪಡುವ ಸಮಾಜೋ-ರಾಜಕೀಯ ಮುನ್ನೋಟದ ಹೆಚ್ಚು ಅರ್ಥಪೂರ್ಣ ಆರಂಭ - ಇವೆಲ್ಲವುಗಳಿಗೂ ಬಹುಭಾಷಿಕತೆಯೇ ತಳಹದಿಯಾಗಬೇಕಾಗುತ್ತದೆ. (ಪು. 3)

**ಪಠ್ಯಪುಸ್ತಕಗಳು**

ಮಾರುಕಟ್ಟೆಯಲ್ಲಿ ಲಭ್ಯವಿರುವ ಹೆಚ್ಚಿನ ಪಠ್ಯಪುಸ್ತಕಗಳು ಕಲಿಕೆಯು ಸರಳರೇಖಾತ್ಮಕ ಕ್ರಮದಲ್ಲಿ ನಡೆಯುತ್ತದೆ ಹಾಗೂ ದ್ವಿತೀಯ ಭಾಷೆಯನ್ನು ಕಲಿಯುವುದೆಂದರೆ ಆ ಭಾಷೆಯ ರಚನೆಯನ್ನು ಮೊದಲು ಕರಗತ ಮಾಡಿಕೊಳ್ಳುವುದು ಎಂಬ ಊಹೆಯೊಂದಿಗೆ ಬರೆಯಲಾದವು. ಬಹುತೇಕ ಪಠ್ಯಪುಸ್ತಕ ಲೇಖಕರು ಮತ್ತು ಶಿಕ್ಷಕರ ಅಭಿಪ್ರಾಯದಲ್ಲಿ ಭಾಷೆಯೊಂದರ ರಚನೆಗಳನ್ನು ಕರಗತಮಾಡಿಕೊಳ್ಳಲು ಆ ಭಾಷೆಯ ಮೂಲಾಕ್ಷರಗಳು ಮತ್ತು ವ್ಯಾಕರಣವನ್ನು ಕಲಿಕಾರ್ಥಿಯು ಅದನ್ನು ಬಳಸಲು ಕಲಿಯುವ ಮೊದಲೇ ಕಲಿಸಿಬಿಡಬೇಕು. ಪರಿಣಾಮವಾಗಿ, ಹೆಚ್ಚಿನ ಇಂಗ್ಲಿಷ್ ಶಾಲಾ ಪಠ್ಯಪುಸ್ತಕಗಳು ಮೂಲಾಕ್ಷರಗಳನ್ನು ಮತ್ತು “ಇದು ಏನು?” “ಇದು....” ಎಂಬಂತಹ ರಚನೆಗಳನ್ನು ಕಲಿಸುವುದರೊಂದಿಗೆ ಪ್ರಾರಂಭವಾಗುತ್ತವೆ.

ಪ್ರಥಮ ಮತ್ತು ದ್ವಿತೀಯ ಭಾಷಾ ಕಲಿಕೆಯ ಕುರಿತ ಈಗಿನ ಸಂಶೋಧನೆಯು ದ್ವಿತೀಯ ಭಾಷಾ ಕಲಿಕೆಯು ಈ ದಾರಿಯಲ್ಲಿ ಸಾಗುವುದಿಲ್ಲ ಎಂಬುದನ್ನು ಯಥೇಚ್ಛವಾಗಿ ತೋರಿಸಿದೆ. ಕಲಿಕಾರ್ಥಿಗಳು ಕಲಿಕೆಯ ಸಾರ್ವತ್ರಿಕ ಕ್ರಮವೊಂದನ್ನು ಹೊಂದಿರುತ್ತಾರೆಂದು ನಂಬಲಾಗಿದೆ. ಆದ್ದರಿಂದ ಶಿಕ್ಷಕರು ಅಥವಾ ಪಠ್ಯಪುಸ್ತಕವು ಯಾವ ಕ್ರಮದಲ್ಲಿ

ವ್ಯಾಕರಣವನ್ನೋ ಭಾಷಿಕ ವರ್ಗವನ್ನೋ ಪ್ರಸ್ತುತಪಡಿಸುತ್ತದೆ ಎನ್ನುವುದು ಮುಖ್ಯವಲ್ಲ. ಅಂದರೆ ಭಾಷೆಯೊಂದರ ಬೋಧನೆ/ಕಲಿಕೆಯಲ್ಲಿ ಶಿಕ್ಷಕರಿಗೆ ಅಥವಾ ಪಠ್ಯಪುಸ್ತಕಕ್ಕೆ ಸ್ಥಾನವೇ ಇಲ್ಲ ಎಂದು ಅರ್ಥವಲ್ಲ. ಶಿಕ್ಷಕರು ಮತ್ತು ಪಠ್ಯಪುಸ್ತಕಗಳು ಕಲಿಕೆಯ ಪ್ರಕ್ರಿಯೆಯನ್ನು ಸುಗಮಗೊಳಿಸುವ ಪಾತ್ರವನ್ನು ನಿರ್ವಹಿಸುತ್ತವೆ ಎಂದಷ್ಟೇ ಅದು ಸೂಚಿಸುತ್ತದೆ. ಭಾಷೆಯ ಕಲಿಕಾಂಶಗಳನ್ನು ನಿರ್ದಿಷ್ಟ ಕ್ರಮದಲ್ಲೇ ಪ್ರಸ್ತುತಪಡಿಸಬೇಕೆಂಬ ಒತ್ತಾಯವನ್ನು ಹೇರುವ ಮೂಲಕ ಇದನ್ನು ಸಾಧಿಸಲಾಗುವುದಿಲ್ಲ; ಬದಲಾಗಿ, ಕಲಿಕಾರ್ಥಿಗಳು ಸಂಬಂಧವೇರ್ಪಡಿಸಿಕೊಳ್ಳಬಹುದಾದ ಆಸಕ್ತಿದಾಯಕವೂ, ಅರಿವಿಗೆ ಸವಾಲೊಡ್ಡುವಂಥವೂ ಆದ ಮಾಹಿತಿಗಳನ್ನು ಒದಗಿಸುವ ಮೂಲಕ ಇದನ್ನು ಸಾಧಿಸಬಹುದು. ಆದ್ದರಿಂದ ಪಠ್ಯಪುಸ್ತಕಗಳು ಕಲಿಕಾರ್ಥಿಯ ಸೃಷ್ಟಿಶೀಲತೆಗೆ ಅವಕಾಶವನ್ನು ಒದಗಿಸಿ, ಅವನ/ಅವಳ ಪೂರ್ವಾನುಭವವನ್ನು ಮತ್ತು ಏಕಕಾಲದಲ್ಲಿ ಇತರ ಭಾಷೆ ಮತ್ತು ವಿಷಯಗಳಲ್ಲಿ ಪಡೆಯುತ್ತಿರುವ ಅನುಭವವನ್ನು ಕಲಿಕೆಯ ಸನ್ನಿವೇಶಕ್ಕೆ ತರಲು ಅವಕಾಶ ನೀಡಬೇಕು. ಈ ರೀತಿ ವ್ಯಾಸಂಗ ಕ್ರಮದಾದ್ಯಂತದ ಕಲಿಕೆಯು ಕಲಿಕಾರ್ಥಿಯ ಸಮಗ್ರ ಬೆಳವಣಿಗೆಗೆ ಅನುಕೂಲಕರ.

**ಇತರ ಬೋಧನಾ ಸಾಮಗ್ರಿಗಳು**

ಕಲಿಕಾರ್ಥಿಗಳು ಪ್ರಥಮ ಭಾಷೆಯಂತೆಯೇ ಕಲಿಯಬೇಕಾದ ಭಾಷೆಗೂ ಸಂವೇದನಾಶೀಲರಾಗುವಂತೆ ಮಾಡಲು ಕಲಿಯಬೇಕಾದ ಭಾಷೆಯ ಎಲ್ಲಾ ವೈವಿಧ್ಯಗಳಿಗೂ ಕಲಿಕಾರ್ಥಿಗಳನ್ನು ಅನಾವೃತಗೊಳಿಸಲಾಗುತ್ತದೆ ಎನ್ನುವುದನ್ನು ಅರಿತುಕೊಳ್ಳುವುದು ಅತ್ಯಂತ ಮುಖ್ಯವಾದುದು. ಪ್ರಥಮ ಭಾಷೆಯ ಕಲಿಕೆಯಲ್ಲಿ, ಕಲಿಕಾರ್ಥಿಯು ವಿವಿಧ ಸನ್ನಿವೇಶಗಳಲ್ಲಿ ಭಾಷಾನುಭವವನ್ನು ಪಡೆಯುವಂತೆ ದ್ವಿತೀಯ ಭಾಷೆಯ ಕಲಿಕಾರ್ಥಿಯೂ ಸಹ ಶ್ರವ್ಯ-ದೃಶ್ಯ ಸಾಮಗ್ರಿಗಳು, ದೂರದರ್ಶನ, ರೇಡಿಯೋ ಕಾರ್ಯಕ್ರಮಗಳು ಮುಂತಾದ ವೈವಿಧ್ಯಪೂರ್ಣವೂ, ಆಸಕ್ತಿಕರವೂ ಆದ ಕಲಿಕಾ ಸಾಮಗ್ರಿಗಳಿಗೆ ಅನಾವರಣಗೊಳ್ಳುವಂತಾಗಬೇಕು. ಕತೆ, ಕವನ ಮತ್ತು ಪ್ರಾಸಬದ್ಧ ರಚನೆ, ಭಾಷಣ ಮತ್ತು ಚರ್ಚೆಗಳನ್ನು ಆಲಿಸುವುದು, ನಾಟಕ, ಕಿರು-ನಾಟಕಗಳನ್ನು ನೋಡುವುದು ಇತ್ಯಾದಿಗಳೂ ಉಪಯುಕ್ತ. ಈ ಬಗೆಯ ಅನಾವರಣವು ಕಲಿಕಾರ್ಥಿಯಲ್ಲಿ ವಸ್ತುತಃ ಬಳಕೆಯಲ್ಲಿರುವ ಭಾಷೆಯನ್ನು ಕಲಿಯುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆಯಲ್ಲದೆ ಭಾಷೆಯ ನುಡಿಗಟ್ಟು ಹಾಗೂ ಛಂದೋಲಕ್ಷಣಗಳನ್ನು ಅರ್ಜಿಸಲು ಸಹಾಯವಾಗುತ್ತದೆ.

ದೇಶದ ವಿವಿಧ ಭಾಗಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನುದ್ದೇಶಿಸಿ ಕಾರ್ಯನಿರ್ವಹಿಸುತ್ತಿರುವ ಹಲವಾರು ಸರ್ಕಾರೇತರ ಸಂಸ್ಥೆಗಳು ಮೂರರಿಂದ ಹನ್ನೆರಡು ವರ್ಷ ವಯಸ್ಸಿನ ಮಕ್ಕಳಿಗಾಗಿ ಆಸಕ್ತಿದಾಯಕವೂ, ನವೀನವೂ ಆದ ಕಲಿಕಾ ಸಾಮಗ್ರಿಗಳನ್ನು ನಿರ್ಮಿಸಿವೆ. ಉದಾಹರಣೆಗೆ, ಸ್ಪಾರ್ಕ್ ಇಂಡಿಯಾ, ಸಿಐಇಎಫ್ಎಲ್ (ಹೈದ್ರಾಬಾದ್), ಮೂರರಿಂದ ಆರು ವರ್ಷ ವಯಸ್ಸಿನ ಮಕ್ಕಳಿಗಾಗಿ 'ಸ್ಪಾರ್ಕ್ ಬಿಗ್ ಬುಕ್' ತಯಾರಿಸಿದ್ದು, ಇದು, 'ಎ ಪಾಟ್ ಆಫ್ ಲೈಟ್' (ಬೆಳಕಿನ ಬಿಂದಿಗೆ) ಶೀರ್ಷಿಕೆಯ ಕತೆಯೊಂದನ್ನು ಹೇಳುತ್ತದೆ (ದಿ ಹಿಂದೂ, 6ನೇ ಫೆಬ್ರುವರಿ 2003). ಈ ಕತೆಯು ಸುಂದರವಾದ ಚಿತ್ರಗಳ ಸಹಿತವಾಗಿದೆ. ಮಕ್ಕಳಿಗೆ ಸಂಬಂಧಿತ ಚಿತ್ರಗಳನ್ನು ತೋರಿಸುತ್ತ ಕತೆಯನ್ನು ಓದಿ ಹೇಳಬಹುದಾಗಿದೆ. ಸ್ಪಾರ್ಕ್ ಇಂಡಿಯಾವು ಶ್ರವ್ಯ-ದೃಶ್ಯ ಸಾಮಗ್ರಿಗಳನ್ನು ಸಹ ತಯಾರಿಸಿದೆ. ಇದನ್ನು ಪ್ರಾಥಮಿಕ ಶಾಲಾ ಶಿಕ್ಷಕರು ಕತೆ ಕವನಗಳನ್ನು ಕಲಿಸಲು ಮತ್ತು ಇತರ ಚಟುವಟಿಕೆಗಳನ್ನು

ಹಮ್ಮಿಕೊಳ್ಳಲು ಬಳಸಬಹುದಾಗಿದೆ. ಮೇಲಿನ ವೃತ್ತಪತ್ರಿಕೆ ಲೇಖನದಲ್ಲಿ ಗಮನಿಸಿದಂತೆ, ಕತೆ ಹೇಳುವಿಕೆಯು ಮಕ್ಕಳಿಗೆ ಏಕಾಕ್ಷರ ಉತ್ತರಗಳಿಂದ ಇಡೀ ವಾಕ್ಯವನ್ನು ಆಡುವುದರೆಡೆ ಕ್ಷಿಪ್ರವಾಗಿ ಪ್ರಗತಿ ಹೊಂದಲು ಮತ್ತು ನಂತರದಲ್ಲಿ ತಮ್ಮ ಸ್ವಂತ ಕತೆಗಳನ್ನು ಬರೆಯಲು ಸಹಾಯಮಾಡುತ್ತದೆ. ಆದರೂ ಬಹುತೇಕ ಶಿಕ್ಷಕರು ಕತೆಗಳ ಮೂಲಕ ಇಂಗ್ಲಿಷ್ ಕಲಿಸುವುದರಲ್ಲಿ ಆಸಕ್ತಿ ಹೊಂದಿಲ್ಲದಿರುವುದು ದುರದೃಷ್ಟಕರ. ಅವರದನ್ನು ಮಾಡಿದಾಗಲೂ, ಅದನ್ನು ಬೇರಾವುದೇ ಪಠ್ಯದಂತೆ ಕೇವಲ ಓದಿಬಿಡುತ್ತಾರೆಯೇ ವಿನಾ ಕತೆಯಂತೆ 'ಓದು'ವುದಿಲ್ಲ. ಮನೆಯಲ್ಲಿ ಇಂಗ್ಲಿಷ್ ಮಾತನಾಡದ ಮಧ್ಯಮ ಮತ್ತು ಕೆಳಮಧ್ಯಮ ವರ್ಗದ ಹಿನ್ನೆಲೆಯಿಂದ ಬರುವ ಮಕ್ಕಳ ಭಾಷಾ ಕಲಿಕೆಯ ಸಾಮರ್ಥ್ಯವನ್ನು ಹೆಚ್ಚಿಸಲು ಕತೆ ಹೇಳುವಿಕೆಯು ಸಹಾಯ ಮಾಡುತ್ತದೆ ಎಂದು ಕೆಲವು ಸಂಶೋಧಕರು ಗಮನಿಸಿದ್ದಾರೆ.

ಭಾಷಾ ಕಲಿಕೆಯ ಪ್ರಾರಂಭಿಕ ಹಂತಗಳಲ್ಲಿ ನಾವು ಭಾಷೆಯ ಮೇಲೆ ಕಡಿಮೆ ಅವಲಂಬಿತವಾಗಿರುವ ರೀತಿಯಲ್ಲಿ ವಿಷಯವನ್ನು ಪ್ರಸ್ತುತಪಡಿಸಬೇಕಿದೆ. ತಾವು ನೀಡಿದ ಮಾಹಿತಿ ಗ್ರಾಹ್ಯವಾಗುವಂತೆ ಮಾಡಲು ಶಿಕ್ಷಕರು ಬಳಸುವ ಇತರೆ ತಂತ್ರಗಳಲ್ಲಿ ಮಾಹಿತಿಯ ಸಂವಹನಕ್ಕೆ ಭಾಷೆಯನ್ನು ಅತಿ ಕಡಿಮೆ ಅವಲಂಬಿಸುವ ಗ್ರಾಫಿಕ್ ಆರ್ಗನೈಸರ್ಸ್ (ರೇಖಾಚಿತ್ರ ಸಂಘಟಕಗಳು) ತಂತ್ರದ ಬಳಕೆಯೂ ಒಂದು. ಕ್ಯಾರಿಯರ್ (2005) ಅವರ ಪ್ರಕಾರ, ರೇಖಾಚಿತ್ರ ಸಂಘಟಕಗಳು ಕಲಿಕಾರ್ಥಿಗಳೊಂದಿಗೆ ಬಳಸಲು ಅತ್ಯಂತ ಪ್ರಭಾವಶಾಲಿ ಕಲಿಕಾ ಸಾಧನಗಳಾಗಿವೆ. ಏಕೆಂದರೆ ಸ್ಟೈನ್ (1985) ಅವರು ಹೇಳಿದಂತೆ,

> ...ಅವು ಮಾಹಿತಿಯನ್ನು, ಚಿತ್ರಗಳು, ಹೆಸರು ಪಟ್ಟಿಗಳು, ಅಥವಾ ಚಿಕ್ಕ ಪದಗುಚ್ಛಗಳ ಮೂಲಕ ಪ್ರದರ್ಶಿಸುವುದರಿಂದ ಭಾಷಾ ಭಾರವನ್ನು ಕಡಿಮೆ ಮಾಡುತ್ತವೆ. ಅಲ್ಲದೆ ನೋಡುವುದಕ್ಕೆ ಅವು ಪೂರ್ಣ ಪಠ್ಯದಂತೆ ದೃತಿಗೆಡಿಸುವಂತಹವಲ್ಲ. ಪ್ರಮುಖ ಪರಿಕಲ್ಪನೆಗಳು ಮತ್ತು ಅವುಗಳ ನಡುವಿನ ಸಂಬಂಧಗಳು, ಹೋಲಿಕೆ ಮತ್ತು ವೈರುಧ್ಯಗಳು, ಪ್ರಕ್ರಿಯೆಗಳು, ಕಾರಣ ಮತ್ತು ಪರಿಣಾಮ, ಹಾಗೂ ಗುಣಲಕ್ಷಣಗಳನ್ನು ಪ್ರಸ್ತುತಪಡಿಸಲು ರೇಖಾಚಿತ್ರ ಸಂಘಟಕಗಳನ್ನು ಬಳಸಬಹುದು. ಇವು ಅವುಗಳ ಉಪಯುಕ್ತತೆಗಳಲ್ಲಿ ಕೆಲವು ಮಾತ್ರ. ಅವು, ಇಂಗ್ಲಿಷ್ ಭಾಷಾ ಕಲಿಕಾರ್ಥಿಗಳಿಗೆ ಮುಖ್ಯ ಪದಗಳನ್ನು ಅಗಾಧ ಪ್ರಮಾಣದ ಪಠ್ಯದಲ್ಲಿ ಹುಡುಕುವುದಕ್ಕೆ ಬದಲಾಗಿ ಆ ಪದಗಳ ಮೇಲೇ ಗಮನವನ್ನು ಕೇಂದ್ರೀಕರಿಸಲು ಸಹ ಸಹಾಯ ಮಾಡುತ್ತವೆ. ಪೂರ್ವಲೇಖನ ಸಂಘಟಕಗಳಾಗಿ ಮತ್ತು ಘಟಕ ಅಧ್ಯಯನ ಮಾರ್ಗದರ್ಶಿಗಳಾಗಿಯೂ ರೇಖಾಚಿತ್ರ ಸಂಘಟಕಗಳಿಂದ ಹೆಚ್ಚುವರಿ ಪ್ರಯೋಜನವಿದೆ. ಇಂಗ್ಲಿಷ್ ಭಾಷಾ ಕಲಿಕಾರ್ಥಿಗಳು ಕಲಿಕೆಯಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಕೊಳ್ಳುವುದು ಅಗತ್ಯ. ಇದು ತಾವೇನನ್ನು ತಿಳಿದಿದ್ದೇವೋ ಅದನ್ನು ಪ್ರದರ್ಶಿಸುವುದನ್ನೂ ಒಳಗೊಂಡಿದೆ. ಬೇರೆ ಶಬ್ದಗಳಲ್ಲಿ ಹೇಳುವುದಾದರೆ, ಇಂಗ್ಲಿಷ್ ಭಾಷಾ ಕಲಿಕಾರ್ಥಿಗಳು ಗ್ರಾಹ್ಯ ಫಲತಾಂಶವನ್ನು ಮಂಡಿಸುವ ಅಗತ್ಯವಿದೆ. (ಪು. 7)

## ಮೌಲ್ಯಮಾಪನ

ಪ್ರಾಥಮಿಕ ಹಂತದಲ್ಲಿ ತುರ್ತಾಗಿ ನಿಭಾಯಿಸಬೇಕಾದ ಇನ್ನೊಂದು ಬಹುಮುಖ್ಯ ವಿಷಯವೆಂದರೆ ಕಲಿಕಾರ್ಥಿಗಳ ಮೌಲ್ಯಮಾಪನದ ಸಮಸ್ಯೆ. ಪ್ರಸ್ತುತ, ದೇಶದ ಹೆಚ್ಚಿನ ಶಾಲೆಗಳು ವಾರ್ಷಿಕ ಮೌಲ್ಯಮಾಪನದ ಜೊತೆಗೆ ವರ್ಷದಲ್ಲಿ ಮೂರರಿಂದ ನಾಲ್ಕು ಬಾರಿ ವಿದ್ಯಾರ್ಥಿಗಳ ಮೌಲ್ಯಮಾಪನವನ್ನು ಮಾಡುತ್ತವೆ. ನಿರಂತರ ಮೌಲ್ಯಮಾಪನದ ಹೆಸರಿನಲ್ಲಿ ಇದನ್ನು ನಿರ್ವಹಿಸಲಾಗುತ್ತದೆ. ಆ ಶಾಲೆಗಳು ಅಥವಾ ಶಿಕ್ಷಕರು ಮಕ್ಕಳ ಪ್ರಗತಿಯನ್ನು ದಾಖಲಿಸಲು ವರ್ಷಪೂರ್ತಿ ಅಂಕಗಳ ಬದಲಿಗೆ ದರ್ಜೆ(ಗ್ರೇಡ್)ಗಳನ್ನು ಬಳಸುತ್ತಾರೆ. ಆದರೂ ಮಕ್ಕಳಿಗೆ ನಿಜವಾಗಿಯೂ ಏನು **ತಿಳಿದಿದೆ** ಎಂಬುದರ ಕುರಿತು ಹೆಚ್ಚಿನ ಸುಳಿವು ಅವರಿಗಿರುವುದಿಲ್ಲ. ಬದಲಿಗೆ, ವರ್ಷಪೂರ್ತಿ ಕೈಗೊಳ್ಳುವ ಈ ಕಾರ್ಯವು, ಶಿಕ್ಷಕರಿಗೆ ಪೋಷಕರಿಗೆ ಮತ್ತು ಶಿಕ್ಷಣ ಇಲಾಖೆಗೆ ಕಲಿಕಾರ್ಥಿಗಳಿಗೆ ಏನು **ತಿಳಿದಿಲ್ಲ** ಎಂಬುದನ್ನಷ್ಟೇ ಹೇಳುತ್ತದೆ. ವರ್ಷದ ಯಾವುದೇ ಸಮಯದಲ್ಲೇ ಆದರೂ ಕಲಿಕಾರ್ಥಿಯ ಪ್ರಗತಿಯನ್ನು ದಾಖಲಿಸಲು ಇದು ಸೂಕ್ತ ವಿಧಾನವಲ್ಲವೆಂದು ಪ್ರಪಂಚಾದ್ಯಂತದ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಕಲಿಕಾರ್ಥಿಗಳ ಪ್ರಗತಿಯನ್ನು ದಾಖಲಿಸುವ ಪರ್ಯಾಯ ಮಾರ್ಗಗಳನ್ನು ಸಹ ಅವರು ಸೂಚಿಸಿದ್ದಾರೆ. ಕಲಿಕಾರ್ಥಿಗಳ ಮಾಹಿತಿ ಸಂಪುಟವನ್ನು (ಪೋರ್ಟ್‌ಫೋಲಿಯೋ) ನಿರ್ವಹಿಸುವುದು ಮತ್ತು ಕಲಿಕಾರ್ಥಿಯ ಹಿಂದಿನ ಹಂತಕ್ಕೆ ಸಂಬಂಧಿಸಿದಂತೆ ಆತನ/ಆಕೆಯ ಪ್ರಗತಿಯನ್ನು ಮೌಲ್ಯಮಾಪನ ಮಾಡುವ ಹೊತ್ತಿನಲ್ಲಿ ಕಲಿಕಾರ್ಥಿಯನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಸೇರಿದಂತೆ ಗುಣಾತ್ಮಕ ಕ್ರಮಗಳು ಆ ಪರ್ಯಾಯದಲ್ಲಿ ಸೇರಿವೆ. ಈ ರೀತಿಯ ಮೌಲ್ಯಮಾಪನವು ಕಲಿಕಾರ್ಥಿಗೆ ತನ್ನ ಕಲಿಕೆಯನ್ನು ಹೆಚ್ಚು ಸೃಜನಾತ್ಮಕವಾಗಿ ಮತ್ತು ವಿಮರ್ಶಾತ್ಮಕವಾಗಿ ನೋಡಲು ಮತ್ತು ಇತರರೊಂದಿಗೆ ತೀವ್ರವಾಗಿ ಸ್ಪರ್ಧಿಸುವ ಮತ್ತು ಆ ಪ್ರಕ್ರಿಯೆಯಲ್ಲಿ ಮಾರ್ಗವನ್ನೇ ಕಳೆದುಕೊಳ್ಳುವ ಅಪಾಯದಿಂದ ಪಾರಾಗಲು ಸಹಾಯ ಮಾಡುತ್ತದೆ. ಸ್ವಯಂಮೌಲ್ಯಮಾಪನದ ಉದ್ದೇಶವೇನೆಂದರೆ, ಮೌಲ್ಯಮಾಪನದ ಪ್ರಕ್ರಿಯೆಯಲ್ಲಿ, ಶಿಕ್ಷಕರ ಸಹಾಯದೊಂದಿಗೆ ತಮ್ಮನ್ನು ತಾವು ಮೌಲ್ಯಮಾಪನ ಮಾಡಿಕೊಳ್ಳಲು ಕಲಿಕಾರ್ಥಿಗಳನ್ನು ಶಕ್ತರನ್ನಾಗಿಸುವುದು. ಶಿಕ್ಷಕರನ್ನು ಸಹ ಮೌಲ್ಯಮಾಪನಕ್ಕೆ ಬಳಸಬೇಕಾದ ಸಾಧನಗಳು, ಮೌಲ್ಯಮಾಪನದ ತಂತ್ರಗಳು ಮತ್ತು ಮಾನದಂಡಗಳೊಂದಿಗೆ ಸನ್ನದ್ಧರಾಗಿಸುವುದು ಅಗತ್ಯವಿದೆ. ಆಗ ಮಾತ್ರವೇ ಕಲಿಕಾರ್ಥಿಗಳು ವಿವಿಧ ಕ್ಷೇತ್ರಗಳಲ್ಲಿ ಏನು ಕಲಿತಿದ್ದಾರೆ ಎಂಬುದರ ಸಂಪೂರ್ಣ ತಿಳಿವಳಿಕೆ ಸಾಧ್ಯವಾಗುತ್ತದೆ. ಹೀಗಾಗಿ, ಪ್ರಾಥಮಿಕ ಹಂತದಲ್ಲಿ ವಿದ್ಯಾರ್ಥಿಗಳ ಕಲಿಕೆಯನ್ನು ನಿರ್ಣಯಿಸಲು ಪರಾಮರ್ಶಕ ಅಂಶಗಳ ನಿಟ್ಟಿನಲ್ಲಿ ಕಾರ್ಯನಿರ್ವಹಿಸಬಹುದಾದ ಎನ್‌ಸಿಎಫ್ 2005ನ್ನು ಆಧರಿಸಿದ ಸ್ಥೂಲ ಪರಿಕಲ್ಪನೆಗಳನ್ನು/ಪ್ರಗತಿ ಸೂಚಕಗಳನ್ನು ಗುರುತಿಸುವ ಅವಶ್ಯಕತೆಯಿದೆ. ಇವು ಸರ್ವಾಂಗೀಣ ವ್ಯವಸ್ಥೆಯ ಕಾರ್ಯಶೀಲತೆ, ಹೊಣೆಗಾರಿಕೆ ಮತ್ತು ಉತ್ತರದಾಯಿತ್ವಗಳ ಗುಣಮಟ್ಟದ ಕುರಿತು ಮರುಮಾಹಿತಿ ನೀಡುವ ಕಾರ್ಯರೀತಿಯನ್ನು ನಿರ್ವಹಿಸುತ್ತವೆ.

**ಉಲ್ಲೇಖಗಳು:**

**Agnihotri, R. K**. (1995). Multilingualism as a classroom resource. In K. Heugh, A. Sieruhm & P. Pluddemann (Eds.), Multilingual education for South Africa (pp. 3-7). Johannesborh, Germany: Heinemann.

**Agnihotri, R. K.** (1997). Multilingualism, colonialism and translation. In S. Ramakrishna (Ed.), Translation and multilingualism: Post-colonial contexts (pp. 34-46). Delhi: Pencraft International.
**Agnihotri, R. K.** (2000). Teacher's space in the classroom. In R. Mathew, **R. L. Eapen, & J. Tharu** (Ed.) The language curriculum: Dynamics of change, vol. 1, (pp. 157-161). Hyderabaಯd: Orient Longman.

**Agnihotri, R. K.** (2007). Towards a pedagogical paradigm rooted in multilinguality, International Multilingual Research Journal, 1(2), 1-10.
**Carrier, Karren A**. (2005). Key issues for teaching English learners in academic classrooms. Middle School Journal (J1), v37 n2 p4-9
**Krashen, Stephen D.** (1987). Principles and practice in second language acquisition. Englewood Cliffs, NJ: Prentice-Hall International.
**Krashen, Stephen D**. (1988). Second language acquisition and second language learning. NJ: Prentice-Hall International, 1988.
**National Knowledge Commission.** (2007). Recommendations on school education. New Delhi: Government of India.
**Swain, M.** (1985). Communicative competence: Some roles of comprehensible input and comprehensible output in its development. In **S. Gass & C. Madden (Eds.),** Input in second language acquisition (pp. 235-253). Rowley, MA: Newbury House.
**National Council of Educational Research and Training.** (2006). Teaching of English, National Focus Group Position Paper, Vol. 1.4. New Delhi: NCERT.
**National Council of Educational Research and Training.** (2006). Teaching of Indian Languages. National Focus Group Position Paper, Vol. 1.3. New Delhi: NCERT.
**The Hindu** Feb 6, 2003. 'A Pot of Light: a story from India.'
ಡಾ. ಎ.ಎಲ್. ಖನ್ನಾ ಅವರು ದೆಹಲಿ ವಿಶ್ವವಿದ್ಯಾಲಯದ ರಾಜಧಾನಿ ಕಾಲೇಜಿನಲ್ಲಿ ರೀಡರ್ (ಇಂಗ್ಲಿಷ್) ಆಗಿದ್ದರು.

amrit.1.khanna@gmail.com

## ಪ್ರಶ್ನೆಗಳು

1. ರಾಷ್ಟ್ರೀಯ ಜ್ಞಾನ ಆಯೋಗವು ಭಾರತದಲ್ಲಿ ಇಂಗ್ಲೀಷ್ ಕಲಿಕೆಯ ಕುರಿತು ಯಾವ ನಿಲುವನ್ನು ತಳೆದಿದೆ? ಪ್ರಾಥಮಿಕ ಹಂತದಲ್ಲಿ ಇಂಗ್ಲೀಷ್ ಕಲಿಕೆಯ ಕುರಿತು ಅದು ಮಾಡಿದ ಶಿಫಾರಸ್ಸುಗಳು ಯಾವವು?
2. ಲೇಖಕರು ಮಂಡಿಸಿರುವ ಸಮಸ್ಯೆಗಳಲ್ಲಿ ಕೆಲವನ್ನು ಸರ್ಕಾರ, ಕೆಲವನ್ನು ಶಿಕ್ಷಕರ ಇಲಾಖೆ/ವಿಶ್ವವಿದ್ಯಾಲಯ, ಇನ್ನು ಕೆಲವನ್ನು ಶಿಕ್ಷಕ ಸಂಸ್ಥೆಯು ನಿವಾರಿಸಬಹುದಾದರೆ ಉಳಿದವನ್ನು ಶಿಕ್ಷಕರು ನಿವಾರಿಸಬೇಕಾಗುತ್ತದೆ. ಸಮಸ್ಯೆಗಳನ್ನು ಈ ನಾಲ್ಕು ಗುಂಪುಗಳಲ್ಲಿ ಪಟ್ಟಿಮಾಡಿ.

3. ಲೇಖಕರು ಹೆಚ್ಚು ದೀರ್ಘವಾಗಿ ಚರ್ಚಿಸುವ ಅಂಶವೆಂದರೆ, ಇಂಗ್ಲೀಷ್ ಶಿಕ್ಷಕರ ಪಾತ್ರ. ಭಾರತದ ಶಾಲೆ, ಕಾಲೇಜುಗಳ ಇಂಗ್ಲೀಷ್ ಶಿಕ್ಷಕರಲ್ಲಿ ಯಾವ ಕೊರತೆಗಳನ್ನು ಲೇಖಕರು ಗುರುತಿಸುತ್ತಾರೆ? ಅವನ್ನು ನಿವಾರಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕೆಂದು ಅವರು ಬಯಸುತ್ತಾರೆ?

ಅನುವಾದಕರು: ಎಂ.ಜಿ. ಹೆಗಡೆ
ಪರಿಶೀಲಕರು: ಗುಂಡೂರ್, ಶೈಲಜ ಜಿ.ಪಿ.